ಬಿ. ರಾಜಶೇಖರಪ್ಪ

# ಗೌಡನಹಳ್ಳಿಯ ಶಿಲಾಶಾಸನ: ಒಂದು ಪುನರಧ್ಯಯನ

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕು, (ಕಸಬಾ ಹೋಬಳಿ) ಗೌಡನಹಳ್ಳಿಯಲ್ಲಿ, ಚಿತ್ರದುರ್ಗದ ಕೊನೆಯ ಪಾಳೆಯಗಾರ ದೊರೆ ಕೊನೆಯ (ಅಥವಾ ಐದನೆಯ) ಮೆದಕೆ(ೇ)ರಿ ನಾಯಕನ (ಶಾಸನಗಳಲ್ಲಿ 'ಮೆದಕೆರಿ' 'ಮದಕೇರಿ', 'ಮೆದಿಕೆರಿ' ಇತ್ಯಾದಿ ರೂಪಗಳೆ ಇರುವುದರಿಂದ ಅಂಥ ರೂಪವನ್ನೇ ಬಳಸುವುದು ಸೂಕ್ತ ಎಂದು ಇಲ್ಲಿ ಹಾಗೇ ಬಳಸಿರುತ್ತೇನೆ.) ತಂದೆಯ ಹೆಸರಿರುವ ಕ್ರಿ. ಶ. ೧೭೫೬ ರ ಒಂದು ಶಿಲಾಶಾಸನ, ಶ್ರೀ ಝಡ್. ಮಹಮ್ಮದ್ ಜಫ್ರುಲ್ಲಾ ಅವರಿಂದ ಹೊಸದಾಗಿ ಪತ್ತೆಯಾಗಿದೆ ಎಂಬ ವರದಿಯೊಂದು ಈಚೆಗೆ (ಪ್ರಜಾವಾಣಿ, ದಿ. ೧೯-೮-೧೯೮೬) ಬಂದಿತಷ್ಟೆ. ಇದರಿಂದ ಆ ದೊರೆಯ ತಂದೆಯ ಹೆಸರು, ಈವರೆಗೆ ತಿಳಿದಿದ್ದಂತೆ 'ಜಾನಕಲ್ಲಿನ ತೊದಲು ಬರಮಣ್ಣನಾಯಕ' ಅಲ್ಲ, 'ದುಗಣಪಣ ನಾಯಕ' ಎಂದು (ಇಲ್ಲಿ ಸ್ವಲ್ಪ ಮುದ್ರಣ ದೋಷ ಆಗಿರಲೂಬಹುದು) ತಿಳಿದು ಬರುವುದಾಗಿ ಹೇಳಲಾದುದರಿಂದ ನಿಜವಾದ ಹೆಸರಿನ ಬಗೆಗೆ ಓದುಗರಲ್ಲಿ ಒಂದು ಜಿಜ್ಞಾಸೆ ಮೂಡುವಂತಾಗಿದೆ.

ಈ ವರದಿ ಓದಿದಾಗ, ಹಿಂದೆ ೧೯೦೩ ರಲ್ಲಿ, ಶ್ರೀ ಬಿ. ಎಲ್. ರೈಸ್ ಅವರು, ಅದೇ ಹಳ್ಳಿಯ, ಅದೇ ಕ್ರಿ. ಶ. ೧೭೫೬ ರ, ಅದೇ ದೊರೆಯ ತಂದೆಯ ಹೆಸರು 'ದುಗಪಣಯಕ' ಎಂದು ಬಂದಿದ್ದ ಒಂದು ಶಾಸನವನ್ನು (ಎ. ಕ., ಸಂ. ೧೧, ಹಿರಿಯೂರು ೫೩) ಪ್ರಕಟಿಸಿದ್ದುದು ನನ್ನ ಗಮನಕ್ಕೆ ಬಂತು. ಕ್ರಿ. ಶ. ೧೭೫೬ ರಲ್ಲಿ ದೊರೆ ಮೆದಕೆ(ೇ)ರಿ ನಾಯಕ ಯಾರೋ ಒಬ್ಬರ ಹೆಸರಲ್ಲಿ ಹಿರಿಯೂರಲ್ಲಿ ಮಾಡಿಸಿದ್ದ ಅನ್ನಛತ್ರದ ಮಠಕ್ಕೆ, ತಮ್ಮ ಹಿರಿಯರಿಗೆ ಪುಣ್ಯವಾಗಲಿ ಎಂದು, ಅವನ ಆಳ್ವಿಕೆಯ ರಾಜ್ಯದ ಹಿರಿಯೂರು ಸೀಮೆಯ ಗೌಡನಹಳ್ಳಿ ಗ್ರಾಮವನ್ನು ದಾನ ನೀಡಿದ-ಎಂದು ಹೇಳುವ ಶಾಸನ ಅದು. ರೈಸರು ಪ್ರಕಟಿಸಿದ್ದುದು ದೊರೆಯು ಅನ್ನಛತ್ರದ ಮಠಕ್ಕೆ ದಾನ ಕೊಟ್ಟುದರ ಶಾಸನ, ಆದರೆ, ಜಫ್ರುಲ್ಲಾ ಅವರು ಪತ್ತೆ ಮಾಡಿದುದು ಊರು ಕಟ್ಟಿಸಿ ದಾನ ಮಾಡಿದುದರ ಶಾಸನ ಎನ್ನಲಾಗಿತ್ತು. ಇದೊಂದು ಅಂಶ ಬಿಟ್ಟರೆ ಉಳಿದೆಲ್ಲ ಅಂಶಗಳಲ್ಲಿ ಸಾಮ್ಯ ಇರುವುದು ಕಂಡಿತು. ಹೀಗಾಗಿ ಈ ಶಾಸನ ಕುರಿತು ತೀವ್ರ ಕುತೂಹಲ ಮತ್ತು ಶಂಕೆ ಮೂಡಿದುವು.

ಕೊನೆಯ ಮೆದಕೆ(ೇ)ರಿ ನಾಯಕನು (೧೭೫೪-೭೯) (ಹೊಸದುರ್ಗ ತಾಲ್ಲೂಕಿನಲ್ಲಿರುವ) ಜಾನಕಲ್ಲು ಗ್ರಾಮದ ತೊದಲು ಬರಮಣ್ಣನಾಯಕನ ಮಗನಿದ್ದು, ಚಿತ್ರದುರ್ಗದ ದೊರೆ ೨ನೇ ಕಸ್ತೂರಿ ರಂಗಪ್ಪನಾಯಕನ ಮರಣಾನಂತರದಲ್ಲಿ, (ಅವನಿಗೆ ದತ್ತುಮಗನೆನ್ನಿಸುವಂತೆ) ಉತ್ತರಾಧಿಕಾರಿಯಾಗಿ ಮಾಡಲ್ಪಟ್ಟನೆಂದು ಪಾಳೆಯಗಾರರ ಚರಿತ್ರೆಯ ಹಸ್ತಪ್ರತಿಗಳು ಮುಂತಾದವು ಹೇಳುತ್ತವೆ. ಜನ್ಮದಾತ ತಂದೆಯೊಬ್ಬನಿದ್ದರೂ ಪಾಳೆಯಗಾರರು ತಮ್ಮ 'ದತ್ತು ಸಂಬಂಧದ ತಂದೆ'ಯನ್ನೇ ತಮ್ಮ ತಂದೆಯೆಂಬಂತೆ ಉಲ್ಲೇಖಿಸುತ್ತಿದ್ದುದು ಸಂಪ್ರದಾಯ. ಅದರಂತೆಯೆ ಕೊನೆಯ ಮೆದಕೆ(ೇ)ರಿ ನಾಯಕನು ಸಹ ತನ್ನ ದತ್ತು ಸಂಬಂಧದ ತಂದೆ ಇಮ್ಮಡಿ ಕಸ್ತೂರಿ ರಂಗಪ್ಪನಾಯಕನ ಹೆಸರನ್ನೆ ತನ್ನ ತಂದೆಯ ಹೆಸರೆಂಬಂತೆ ತನ್ನ ಶಾಸನ,

ನಿರೂಪ, ಲೇಖನಗಳಲ್ಲಿ ಉಲ್ಲೇಖಿಸಿರುವುದುಂಟು. ಹಾಗೇ ಇಲ್ಲೂ ಅದೇ ಹೆಸರನ್ನು (ಅಂದರೆ – ರಂಗಪ್ಪ ನಾಯಕ ಎಂಬುದನ್ನು-ರಂಗಪನಾಯಕ ಎಂದೇನಾದರೂ) ಉಲ್ಲೇಖಿಸಿದ್ದು, ಅದು ಕೆತ್ತನೆಯ ತಪ್ಪಿನಿಂದ ಅಥವಾ ಓದಿಕೆಯ ತಪ್ಪಿನಿಂದ ('ರಂ' ಇದ್ದುದು 'ದು' ಎಂಬಂತಾಗಿ) 'ದುಗಪಣಯಕ' ಅಥವಾ 'ದುಗಣಪಣ ನಾಯಕ' ಎಂದಾಗಿರಬಹುದೆ?- ಎಂಬ ಶಂಕೆಯೂ ಹುಟ್ಟಿತು. ಇಂಥ ಲಿಪಿದೋಷ ಪಾಠದೋಷಗಳು ಹಲವಾರು ಶಾಸನಗಳಲ್ಲಿ ಆಗಿರುವುದುಂಟು. ಅಂಥ ಕೆಲವನ್ನು ಈಗಾಗಲೇ ನಾನು ಗುರುತಿಸಿದ್ದುದರಿಂದ ಆ ಶಂಕೆ ಇನ್ನೂ ಬಲವಾಯಿತು.[1]

ಅಂತೂ ಇಂಥ ಎಲ್ಲ ಶಂಕೆಗಳಿಗೂ ಸರಿಯಾದ ಉತ್ತರ, ಪರಿಹಾರ, ಶಾಸನದ ಪ್ರತ್ಯಕ್ಷ ಮರುಪರಿಶೀಲನೆಯಿಂದ ಮಾತ್ರ ಸಾಧ್ಯ. ಆದುದರಿಂದ ನಾನು ಆ ಹಳ್ಳಿಗೆ ಹೋಗಿ ಶಾಸನದ ಪುನರಭ್ಯಾಸವನ್ನು ಕೈಗೊಳ್ಳಬೇಕಾಯಿತು.[2] ನಾನು ಇದರ ಮರುಪರಿಶೀಲನೆ ಕೈಗೊಂಡಿದ್ದಾಗ, ಈ ಶಾಸನ ಪತ್ತೆ ಕುರಿತು ಒಂದು ಪ್ರತಿಕ್ರಿಯೆಯೂ ಬಂದಿತು (ಪ್ರಜಾವಾಣಿ, ದಿ. ೨೪-೮-೧೯೮೬). ಅದರಲ್ಲಿ ಶ್ರೀ ಲಕ್ಷ್ಮಣ್ ತೆಲಗಾವಿ ಅವರು ಈ ಶಾಸನ (ಈಹಿಂದೆ ನಾನು ಹೇಳಿದ) ರೈಸರಿಂದ ಪ್ರಕಟವಾದ ಶಾಸನವೇ ಎಂದೂ ಶ್ರೀ ಆರ್.ಎನ್. ಸಾಲೆತ್ತೂರ್ (ಅನೇಕರು ಬರೆಯುವಂತೆ 'ಸಾಲತೊರೆ', 'ಸಾಲೆತ್ತೊರೆ' ಅಲ್ಲ) ಅವರು 'ದುರುಗಪ್ಪ ನಾಯಕ' ಹೆಸರಿನ ಬಗೆಗೆ ಹಿಂದೆಯೇ ೧೯೪೦ರಲ್ಲಿ (ಮುಂಬಯಿ ವಿಶ್ವವಿದ್ಯಾನಿಲಯದ ನಿಯತಕಾಲಿಕೆಯಲ್ಲಿ) ವಿವೇಚಿಸಿ, ಬಲವಾದ ಊಹೆಗಳನ್ನು ಮಾತ್ರ ಮುಂದಿಟ್ಟಿದ್ದರೆಂದೂ ರೈಸರ ಪಾಠದಲ್ಲಿನ 'ಕಸ್ತರ್ರಿ ದುಗಪಣಯಕ' ಎಂಬುದು 'ಕಸ್ತೂರಿ ರಂಗಪ್ಪ ನಾಯಕ' ಎಂದು ಭಾವಿಸಲು ಆಸ್ಪದವಿದೆಯೆಂದೂ ಬರೆದಿದ್ದಾರೆ. ಹಾಗೆಯೇ, 'ಗೌಡನಹಳ್ಳಿ ಶಾಸನಪಾಠದ ಮರುಪರಿಶೀಲನೆಯ ತರುವಾಯ 'ರಾಜಾ ಮದಕರಿ ನಾಯಕನ ತಂದೆಯ ವಿಚಾರದಲ್ಲಿ ಸ್ಪಷ್ಟವಾಗಿ ಹೇಳಲು ಸಾಧ್ಯವಾಗಬಹುದೇ ಹೊರತು ಅವಸರದ ನಿರ್ಣಯ ಸಲ್ಲದು' ಎಂದೂ ಅವರು ಹೇಳಿದ್ದಾರೆ. ಅವರ ವಿಚಾರ ಸರಣಿಯೂ ನನ್ನ ವಿಚಾರ ಸರಣಿಯ ದಾರಿಯಲ್ಲೇ ಇದ್ದಿತಲ್ಲದೆ ಶಾಸನ ಪಾಠದ ಮರುಪರಿಶೀಲನೆಯಾಗದೆ ಯಾವುದನ್ನೂ ನಿರ್ದಿಷ್ಟವಾಗಿ ಹೇಳಲಾಗದು ಎಂಬ ನಿಲವನ್ನೇ ವ್ಯಕ್ತಪಡಿಸಿದೆ.

**ಪುನರಧ್ಯಯನದ ಫಲಿತಾಂಶಗಳು**

ಹಿಂದೆ ಹೇಳಿದಂತೆ ನಾನು ಕೈಕೊಂಡ ಮರುಪರಿಶೀಲನೆಯ ಫಲಿತಾಂಶಗಳನ್ನು, ಆ ಶಾಸನದ ಪ್ರತಿಯ ಛಾಯಾಚಿತ್ರದೊಂದಿಗೆ ಇಲ್ಲಿ ಕೊಡುತ್ತಿದ್ದೇನೆ :

೧. ಗೌಡನಹಳ್ಳಿಗೆ ಹೋಗಿ ಶಾಸನದ ಬಗ್ಗೆ ವಿಚಾರಿಸಿದಾಗ ಆ ಊರಲ್ಲಿ ಇರುವುದು ಒಂದೇ ಶಾಸನ ಎಂದು ತಿಳಿಯಿತು. ಹಾಗೂ ಈ ಶಾಸನ ಇರುವ ಜಾಗ, ಅದರ ಪ್ರಮಾಣ, ಪಾಠ ಇವನ್ನು ನೋಡುತ್ತಿದ್ದಂತೆಯೇ ಹಿಂದೆ ರೈಸರು ಪ್ರಕಟಿಸಿದ್ದ ಶಾಸನವೇ ಇದು, ಬೇರೆಯಲ್ಲ ಎಂದು ಸ್ಪಷ್ಟವಾಯಿತು. ಆದುದರಿಂದ ಇದು ಈಗ ಹೊಸದಾಗಿ ಪತ್ತೆಯಾಗಿರುವ ಶಾಸನ ಎಂದು ಹೇಳಿರುವುದು ಸರಿಯಲ್ಲ.

ಈ ಶಾಸನವು ಬಲಭಾಗದಲ್ಲಿ ಮಧ್ಯೆ ಓರೆಯಾಗಿ ಒಡೆದು ಹೋಳಾಗಿರುವುದಲ್ಲದೆ, ಕೆಳಭಾಗದ ಚಕ್ಕಳ ಪೂರ್ಣ ಸುಲಿದು ಹೋಗಿದೆ. ಹೀಗಾಗಿ ಕೆಳಭಾಗದ ಬರಹ ಪೂರ್ಣ ನಷ್ಟವಾಗಿದ್ದು ಮೇಲಿನ ಅರ್ಧಭಾಗದ ಬರಹ ಮಾತ್ರ ಈಗ ಉಳಿದಿದೆ. ಇದು ಹೀಗಾಗಲಿಕ್ಕೆ ಈಗ್ಗೆ ಕೆಲವು ವರ್ಷಗಳ ಹಿಂದೆ ಇಲ್ಲಿ ಆದ ಒಂದು ಬೆಂಕಿ–ಆಕಸ್ಮಿಕ ಕಾರಣ ಎಂದು ಗ್ರಾಮಸ್ಥರಿಂದ ತಿಳಿಯಿತು. ಬರಹದ ಮೇಲಿನ ಅರ್ಧಭಾಗ ಮಾತ್ರ ಉಳಿದಿದ್ದರೂ ಬಹುಮುಖ್ಯವಾದ ಭಾಗವೇ ಉಳಿದಿದೆ ಎನ್ನುವುದು ಸಮಾಧಾನದ ಸಂಗತಿ.

1. ನೋಡಿ : ೧. 'ಚಂದ್ರವಳ್ಳಿ ಶಾಸನದ ಮೇಲೆ ಹೊಸ ಬೆಳಕು', ಕಸಾಪಪ' ೬೯-೨, ಡಿಸೆಂಬರ್ ೧೯೮೪, ಪುಟ ೮೯-೧೦೦ ; ಹಾಗೂ ೨. 'ಶಾಸನಗಳ ಮರುಪರಿಶೀಲನೆ : ಒಂದು ತೀವ್ರ ಅಗತ್ಯ'-'ಹರತಿ ಸಿರಿ', ಸಂ. : ಲಕ್ಷ್ಮಣ್ ತೆಲಗಾವಿ–ಈ ಸಂಪುಟ ಇಷ್ಟರಲ್ಲೇ ಹೊರಬೀಳಲಿದೆ.
2. ಈ ಶಾಸನದ ಪುನರಭ್ಯಾಸ ಕುರಿತ ಈ ಲೇಖನದ ಸಂಕ್ಷಿಪ್ತರೂಪವನ್ನು ನಾನು ಆಗಲೇ 'ಪ್ರಜಾವಾಣಿ'ಗೆ ಕಳುಹಿಸಿದೆನಾದರೂ ಅದು ಪ್ರಕಟವಾಗಲಿಲ್ಲ.

೨. ಇದು ಹಿಂದೆ ರೈಸರಿಂದ ಪ್ರಕಟವಾಗಿದ್ದ ಶಾಸನ ಎನ್ನುವಲ್ಲಿಯೇ, ಇದು ಜಪ್ರುಲ್ಲಾ ಅವರು ತಿಳಿಸಿರುವಂತೆ ದೊರೆಯು ಊರು ಕಟ್ಟಿಸಿ ದಾನ ಮಾಡಿದ ಶಾಸನ ಅಲ್ಲ,-ತಾನು ಕಟ್ಟಿಸಿದ ಅನ್ನಛತ್ರದ ಮಠಕ್ಕೆ (ಆಗಲೇ ಇದ್ದ ಗೌಡನಹಳ್ಳಿಯನ್ನು) ದಾನ ನೀಡಿದ ಶಾಸನ—ಎನ್ನುವುದು ಕೂಡ ಸ್ಪಷ್ಟಪಡುತ್ತದೆ.

೩. ಈ ಹಿಂದೆ ದೊರೆಯ ತಂದೆಯ ಹೆಸರನ್ನು ಕುರಿತಂತೆ ನನಗೆ ಮೂಡಿದ್ದ ಶಂಕೆ ಹಾಗೂ ಲಕ್ಷ್ಮಣ್ ತೆಲಗಾವಿ ಅವರು (ಆರ್. ಎಸ್. ಸಾಲೆತ್ತೂರ್ ಅವರ ಬಗ್ಗೆ ಪ್ರಸ್ತಾಪಿಸುತ್ತಾ) ವ್ಯಕ್ತಪಡಿಸಿರುವ ಊಹೆ-ಸರಿಯಾದವು ಎಂಬುದನ್ನು ಪುನರ್ ಪರಿಶೀಲನೆಯು ದೃಢಪಡಿಸಿದೆ. ಅಂದರೆ ಈ ಶಾಸನದಲ್ಲಿ ದೊರೆಯ ತಂದೆಯ ಹೆಸರು ರೈಸರಂತೆ 'ದಗಪಣಯಕ' ಎಂದಾಗಲಿ, ಅಥವಾ ಜಪ್ರುಲ್ಲಾರಂತೆ 'ದುಗಣಪಣನಾಯಕ' ಎಂದಾಗಲಿ ಇಲ್ಲ, 'ರಂಗಪಣಯಕ' ಎಂದಿದೆ. ಅಂದರೆ ಇಲ್ಲಿರುವ ಹೆಸರಿನ ಪೂರ್ತಿ ಪಾಠ 'ಕಸ್ತರ್ರಿ ರಂಗಪಣಯಕ' ಎಂದು. ಇದು 'ಕಸ್ತೂರಿ ರಂಗಪ್ಪನಾಯಕ' ಎಂಬುದಕ್ಕೆ ಶಾಸನಕಾರರಿಂದ ಆಗಿರುವ ಅಪಲಿಖಿತ. ಇಲ್ಲಿ ಹೆಸರಿನ ಸಮಸ್ಯೆಗೆ ಮುಖ್ಯ ಕಾರಣವೆಂದರೆ ಆರಂಭದ ಅಕ್ಷರದ ಕೆತ್ತನೆಯೆ. (ಚಿತ್ರದಲ್ಲಿ, ಏಳನೆಯ ಪಂಕ್ತಿಯಲ್ಲಿ, ಅರ್ಧದ ನಂತರದಲ್ಲಿ ಬರುವ ಈ ಹೆಸರಿನ ಲಿಪಿಯನ್ನು ಗಮನಿಸಿ).

ಇಲ್ಲಿ 'ರಂ' ಎಂಬುದರಲ್ಲಿನ 'ರ'ದ ಕೆಳಭಾಗ ದುಂಡಾಗಿಲ್ಲದಿರುವುದೆ ಅದನ್ನು 'ದ'ಕಾರ ಎಂದು ತಿಳಿಯಲು ಕಾರಣವಾಗಿದೆ. ಈ ಶಾಸನದ ಲಿಪಿಯಲ್ಲಿ ಹಲವೆಡೆಗಳಲ್ಲಿ ಬರುವ 'ದ'ಕಾರದ ಕೆತ್ತನೆಯನ್ನು ನೋಡಿದರೆ, ಎಲ್ಲ ಕಡೆಯಲ್ಲೂ ಅದರ ಕೆಳಭಾಗ ಸ್ಪಷ್ಟವಾಗಿ ಮಧ್ಯದಲ್ಲಿ ಒಡೆದು ಎರಡು ದುಂಡು ತಳಗಳನ್ನು ಹೊಂದಿರುವುದು ಕಾಣುತ್ತದೆ. ಆದರೆ ಇಲ್ಲಿ ಹಾಗಿಲ್ಲ. ಮತ್ತು 'ರ' ಕಾರದ ಕೆಳಭಾಗವು ನಸು ಚಪ್ಪಟೆಯಾಗಿರುವಂತೆ ಕೆತ್ತಲಾಗಿರುವುದನ್ನು ಕೆಲವೆಡೆ ಕಾಣಬಹುದು. ಇದರಿಂದ ಇಲ್ಲಿರುವುದು 'ರ'ವೇ ಎನ್ನುವುದು ನಿಶ್ಚಿತವಾಗುತ್ತದೆ.

ಇನ್ನು ಅದರ ಮುಂದೆ ಇರುವುದು (ಉತ್ವಸೂಚಕವಾದ) ಕೊಂಬು (ು) ಅಲ್ಲ, ಬಿಂದುವಿನ ದುಂಡು ರೇಖೆ (೦). ಇಲ್ಲಿನ ಬರಹದಲ್ಲಿ ಅಲ್ಲಲ್ಲಿ ಬರುವ ಕೊಂಬು ಮತ್ತು ಬಿಂದುಗಳ ಕೆತ್ತನೆಯನ್ನು ಪರಿಶೀಲಿಸಿದರೆ ಇದು ಸ್ಪಷ್ಟವಾಗುತ್ತದೆ. ಎಲ್ಲ ಕಡೆಯಲ್ಲೂ ಕೊಂಬು ಅಕ್ಷರದ ಕೆಳಭಾಗದಲ್ಲಿ ಅಂಟಿಕೊಂಡಿದ್ದು ನಂತರ ಮೇಲಕ್ಕೆ ಹೋದಂತೆ ಕೆತ್ತಲ್ಪಟ್ಟಿದೆ. ಅಲ್ಲದೆ ಅಕ್ಷರದ ತಲೆಕಟ್ಟಿಗೆ ಅಂಟಿಕೊಂಡಂತೆ ಕೊಂಬಿನ ಕೆತ್ತನೆ ಎಲ್ಲೂ ಇರುವುದಿಲ್ಲ. ಇಲ್ಲಿನ ದುಂಡು ರೇಖೆ ಮೇಲು ಭಾಗದಲ್ಲಿ ಪೂರ್ಣ ಕೂಡಿಕೊಂಡಿಲ್ಲದಂತಿರುವುದೇ ಇದು ಕೊಂಬು ಎಂದು ತಿಳಿಯಲು ಕಾರಣವಾಗಿದೆ. ಆದರೆ ಕೊಂಬಿನ ದುಂಡುತನಕ್ಕಿಂತ ಇಲ್ಲಿನ ರೇಖೆಯ ದುಂಡುತನ ಹೆಚ್ಚಾಗಿರುವುದಲ್ಲದೆ, ಅದನ್ನು ಪೂರ್ಣಗೊಳಿಸಲು ಮೇಲೆ ಒಂದು ಚಿಕ್ಕ ಕೂಡುಗೆರೆ ಮೂಡಿಸಿರುವುದನ್ನು ನೋಡಬಹುದು. ಆದುದರಿಂದ ಇಲ್ಲಿರುವುದು ಕೊಂಬು ಅಲ್ಲ, ಬಿಂದು ಎಂದು ಸ್ಪಷ್ಟಪಡುತ್ತದೆ.

ಈ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದಿದ್ದರೆ 'ದುಗಪಣಯಕ'ನಿಗೆ ಬದಲು, 'ರಂಗಪಣಯಕ'ನೇ ರೈಸರಿಗೆ ಹಿಂದೇ ಕಂಡಿರುತ್ತಿದ್ದ. ಪಾಳೆಯಗಾರ ದೊರೆಗಳು ತಮ್ಮ ಜನ್ಮದಾತ ತಂದೆಯೊಬ್ಬನಿರುತ್ತಿದ್ದರೂ ತಮ್ಮ ಪೂರ್ವಾಧಿಕಾರಿಯಾದ 'ದತ್ತು ಸಂಬಂಧದ ತಂದೆ'ಯನ್ನೇ ತಮ್ಮ ತಂದೆಯೆಂಬಂತೆ ಉಲ್ಲೇಖಿಸುತ್ತಿದ್ದ ಸಂಪ್ರದಾಯಕ್ಕೆ ಅನುಸಾರವಾಗಿಯೇ ಈ ಶಾಸನವೂ ಇದೆ, ಎನ್ನುವುದು ಇದರಿಂದ ವ್ಯಕ್ತವಾಗುತ್ತದೆ. ಕೊನೆಯ ಮದಕೆ(ಇ)ರಿ ನಾಯಕನು ತನ್ನ ಇತರ ಶಾಸನ, ನಿರೂಪ, ಲೇಖನಗಳಲ್ಲಿ ಹೇಗೋ ಹಾಗೆ ಇಲ್ಲೂ ತನ್ನ 'ದತ್ತು ಸಂಬಂಧದ ತಂದೆ' ಯನ್ನೇ ತನ್ನ ತಂದೆಯೆಂಬಂತೆ ಉಲ್ಲೇಖಿಸಿದ್ದಾನೆ. ಆದುದರಿಂದ 'ದುರುಗಪ್ಪನಾಯಕ' ಇತ್ಯಾದಿ ಹೆಸರನ್ನೂ ಈ ಸಂಬಂಧದ ಊಹೆಗಳನ್ನೂ ಕೈಬಿಡಬೇಕಾಗುತ್ತದೆ.

೪. ಗೌಡನಹಳ್ಳಿ ಗ್ರಾಮಸ್ಥರಿಂದ ತಿಳಿದು ಬಂದ ಇನ್ನೊಂದು ಅಂಶವೂ ಇಲ್ಲಿ ಗಮನಾರ್ಹ. ಈ ಗ್ರಾಮದ ಬಳಿಯಲ್ಲಿ ಒಂದು ದೊಡ್ಡ ಕೆರೆ ಇದೆ. ಇದನ್ನು (ಈ ಊರನ್ನು ಆಳಿದ) ರಂಗಪ್ಪನಾಯಕ ಎನ್ನುವ ರಾಜನೊಬ್ಬ ಕಟ್ಟಿಸಿದ್ದನಂತೆ ಎಂದು (ತಮ್ಮ ಹಿರಿಯರು ಹೇಳುತ್ತಿದ್ದುದಾಗಿ) ಇಲ್ಲಿನ ನಿರಕ್ಷರಕುಕ್ಷಿಗಳಾದ (ಹಾಗೂ ಈ ಶಾಸನದ ವಿಷಯವಾಗಿ ಏನೂ ಅರಿಯದಿರುವ) ಹಳ್ಳಿಗರು ಹೇಳುತ್ತಾರೆ. ಇದು ನಿಜವಿದ್ದರೆ, ಜನ ಹೇಳುವ

ಆ ರಂಗಪ್ಪನಾಯಕ ಶಾಸನದಲ್ಲಿ ಹೇಳಿರುವ (೨ನೇ) ಕಸ್ತೂರಿ ರಂಗಪ್ಪನಾಯಕನೇ ಇರಬಹುದೆ ? ಮತ್ತು ತನ್ನ ಹಿರಿಯರಿಂದ ಅಭಿವೃದ್ಧಿ ಕಾರ್ಯ ನಡೆದಿದ್ದ ಗ್ರಾಮ ವಿದೆಂಬ ಕಾರಣದಿಂದಾಗಿ (೫ನೇ) ಮೆದಕೆ(ೇ)ರಿ ನಾಯಕ ದೊರೆ, ತಮ್ಮ ಹಿರಿಯರಿಗೆ ಪುಣ್ಯವಾಗಲಿ ಎಂದು, ಈ ಗ್ರಾಮವನ್ನು ದಾನ ಕೊಡಲು ಆಯ್ಕೆ ಮಾಡಿರ ಬಹುದೆ ?—ಈ ಯೋಚನೆಗಳೂ ಮೂಡುತ್ತವೆ: ಕೆರೆಯ ಬಳಿಯಲ್ಲಿ 'ರಂಗಾಪುರ' ಎನ್ನುವ ಹಳ್ಳಿಯೊಂದಿ ರುವುದೂ ಗಮನಾರ್ಹವಾಗಿದೆ.

ಕ್ರಿ. ಶ. ೧೬೫೪ರಲ್ಲಿ, ೨ನೇ ಕಸ್ತೂರಿ ರಂಗಪ್ಪ ನಾಯಕನ ಮರಣಾನಂತರದಲ್ಲಿ ಅವನ ಉತ್ತರಾಧಿಕಾರಿ ಯಾದ ಮೆದಕೆ(ೇ)ರಿ ನಾಯಕ ಆಗ ಇನ್ನೂ ೧೨ ವರ್ಷದ ಬಾಲಕನಾಗಿದ್ದ ಎಂಬಂತೆ ತಿಳಿದು ಬರುತ್ತದೆ. ಹಾಗಿದ್ದಲ್ಲಿ ಕ್ರಿ.ಶ. ೧೬೫೬ ರಲ್ಲಿ ಅವನಿಗೆ ಇನ್ನೂ ೧೪ ವರ್ಷ ಎಂದು ತಿಳಿಯಬೇಕಾಗುತ್ತದೆ. ಅವನು ಈ ವಯಸ್ಸಿಗೆ ಹಿರಿಯೂರಿನಲ್ಲಿ ಒಂದು ಅನ್ನಛತ್ರದ ಮಠವನ್ನು ಮಾಡಿಸಿದ್ದು, ಅದಕ್ಕೊಂದು ಹಳ್ಳಿಯನ್ನೂ ದಾನ ನೀಡಿದ್ದು, ಶಾಸನ ಹಾಕಿಸಿದ್ದು ಇವೆಲ್ಲ ಸೋಜಿಗವನ್ನು ತರಬಹುದಾದರೂ ಆಸ್ಥಾನದ ಅಥವಾ ಅಧಿಕಾರವರ್ಗದ ಹಿರಿಯರಿಂದ ಈ ಕಾರ್ಯಗಳೆಲ್ಲ ಜರುಗುತ್ತಿದ್ದು, ಅವರ ಸಲಹೆಯಂತೆ,-ಕಿರಿಯ ವಯಸ್ಸಿನವರಾದರೂ ದೊರೆ ಯಾಗಿ—ಮೆದಕೆ(ೇ)ರಿ ನಾಯಕನು ಇವೆಲ್ಲದಕ್ಕೂ ತನ್ನ ಒಪ್ಪಿಗೆ ನೀಡಿದ್ದಿರಬೇಕು ಎಂದು ಹೇಳಬಹುದು.

೫. ಇನ್ನು ಹಿರಿಯೂರಲ್ಲಿ ದೊರೆಯು ಅನ್ನ ಛತ್ರದ ಮಠವನ್ನು ಮಾಡಿಸಿದ್ದು ಯಾರ ಹೆಸರಿನಲ್ಲಿ ಎನ್ನುವ ವಿಚಾರ : ಈ ಶಾಸನದ ೯ನೆಯ ಪಂಕ್ತಿಯ ಆರಂಭದಲ್ಲೆ ಬರುವ ಆ ಹೆಸರಿನ ಭಾಗದ ಪಾಠವನ್ನು ರೈಸರು—ಕನ್ನಡ ಲಿಪಿಯಲ್ಲಿ ಕೊಡುವಾಗ 'ಪೂತನಾಯ ರವರ ಹೆಸರಲ್ಲು' ಎಂದೂ ರೋಮನ್ (ಇಂಗ್ಲಿಷ್) ಲಿಪ್ಯಂತರದಲ್ಲಿ ಯಾರ ಹೆಸರನ್ನೂ ಕೊಡದೆ, '..... ವರ ಹೆಸರಲ್ಲು' ಎಂದೂ—ಬೇರೆ ಬೇರೆಯ ರೀತಿಯಲ್ಲೆ ಕೊಟ್ಟಿದ್ದಾರೆ. ಅಂದರೆ ಇಲ್ಲಿನ ಹೆಸರಿನ ಭಾಗದ ಅವರ ಓದಿಕೆ ಅವರಿಗೇ ಸಂದೇಹ ತಂದಿದೆ. ಆದರೆ ಶಾಸನದಲ್ಲಿ ಈ ಭಾಗವನ್ನು ಈಗ ಪರಿಶೀಲಿಸಿದಾಗ, ಇಲ್ಲಿನ ಪಾಠ ರೈಸರು ಕೊಟ್ಟಂತಿರದೆ 'ಪೂ॥ ॥ಯವರ ಹೆಸರಲ್ಲು' ಎಂದು ಮಾತ್ರ ಇರುವುದು ಕಂಡು ಬರುತ್ತದೆ. ಇಲ್ಲಿ ಕೆಳಗೆ ಕಲ್ಲಿನ ಚಕ್ಕಳ ಹಾರಿದ್ದರೂ ಇಲ್ಲಿರುವುದು 'ಪೂ'ವೇ ಎಂದು ಸ್ಪಷ್ಟ ವಾಗುವಂತಿದೆ. ಇದರ ನಂತರ ಮುಂದೆ ಎರಡು ದಂಡ ಗಳನ್ನೂ ಸ್ವಲ್ಪ ಅಂತರ ಬಿಟ್ಟು ಮತ್ತೆರಡು ದಂಡಗಳನ್ನೂ ಹಾಕಲಾಗಿದೆ. ಹೀಗಾಗಿ ಇದು ವ್ಯಕ್ತಿಯೊಬ್ಬರ ಹೆಸರನ್ನು ಬಹುಶಃ ಅವರ ಹೆಸರಿನ ಆದ್ಯಕ್ಷರದ ಸಂಕೇತದ ಮೂಲಕ, ಸೂಚಿಸುವ ಪಾಠ ಎನ್ನಬಹುದು. ಈ 'ಪೂ॥ ಯವರ' ಎನ್ನುವುದು ಇದೇ ಮೆದಕೆ(ೇ)ರಿ ನಾಯಕನ ಒಂದು ನಿರೂಪ ದಲ್ಲಿ 'ಪೂರ್ವಣಿ ॥ ಸ್ವಾಮಿಗಳವರು' ಎಂದು ಬಂದಿರುವು ದನ್ನೂ ನೆನಪಿಗೆ ತರುತ್ತದೆ.[3] ಹೆಸರನ್ನು ಪೂರ್ಣ ವಾಗಿ ವಿಸ್ತರಿಸಿ ಬರೆಯದಿರಲು ಕಾರಣವಾಗಲಿ, ಆ ಹೆಸರಾದರೂ ಏನಿರಬಹುದು ಎಂಬುದಾಗಲಿ ಇಲ್ಲಿ ತಿಳಿಯ ದಾಗಿದೆ.

೬. ದೊರೆಯು ಹಿರಿಯೂರಲ್ಲಿ ಮಾಡಿಸಿದ ಆ ಅನ್ನಛತ್ರದ ಮಠ ಯಾವುದು? ಯಾವ 'ಸಂಪ್ರದಾಯ'ಕ್ಕೆ ಸೇರಿದುದು? ಇದರ ನಿರ್ವಾಹಕರು ಅಥವಾ ಗುರುಗಳು ಯಾರಾಗಿದ್ದರು?—ಇದಾವುದರ ವಿವರವೂ ಶಾಸನದಲ್ಲಿಲ್ಲ. ಆದರೆ ಶಾಸನದ ಮೇಲು ಭಾಗದಲ್ಲಿ ಕೆತ್ತಿರುವ ಶಿವಲಿಂಗ, ಲಿಂಗದ ಮುದ್ರೆ ಒತ್ತಲಾಗಿರುವ ನಂದಿ, ಇವುಗಳ ನಸು ಉಬ್ಬು ಚಿತ್ರ, (ಟೊಪ್ಪಿಗೆ ಚಲ್ಲಣಗಳನ್ನು ಧರಿಸಿ ಛತ್ರಿ ಯನ್ನು ಹಿಡಿದು ನಿಂತಿರುವ ಪುರುಷನೊಬ್ಬನ ಒರಟು ರೇಖಾ ಚಿತ್ರ) : ಹಾಗೇ ರೈಸರಲ್ಲಿ ಗೌಡನಹಳ್ಳಿಯನ್ನು 'ಶಿವಾರ್ಪಿತವಾಗಿ' ದಾನ ನೀಡಲಾಯಿತೆಂದು ಬಂದಿರುವ ಪಾಠ (ಈ ಪಾಠವಿದ್ದ ಭಾಗ ಈಗ ಉಳಿದಿಲ್ಲ)—ಇವುಗ ಳಿಂದ ಈ ಹಳ್ಳಿಯನ್ನು ದಾನವಾಗಿ ಪಡೆದ ಅನ್ನಛತ್ರದ ಮಠ ಒಂದು ಶೈವ ಮಠ ಎನ್ನುವುದಂತೂ ನಿಶ್ಚಿತವಾಗಿದೆ. ಬಹುಶಃ ಇದು ಒಂದು ವೀರಶೈವ ಮಠವಾಗಿದ್ದಿರಬೇ ಕೆಂದು ತೋರುತ್ತದೆ. ಹಿರಿಯೂರಲ್ಲಿ ಈ ಅನ್ನಛತ್ರದ ಮಠ ಇದ್ದುದರ ಬಗ್ಗೆ ಈಗ ನಿರ್ದಿಷ್ಟವಾಗಿ ಏನೂ ತಿಳಿಯದು.

---

3. ಶ್ರೀ ಕೂಡ್ಲೀ ಶೃಂಗೇರೀ ಸಂಸ್ಥಾನದ ಪ್ರಾಚೀನ ಶಾಸನ—ಲೇಖನ ಸಂಗ್ರಹ, ಭಾಗ ೧, ಮೈಸೂರು, ೧೯೬೫, ಪುಟ ೮೦, ನಿರೂಪ ೧೫೩, ಕ್ರಿ.ಶ. ಸು. ೧೭೬೬

ಅನ್ನ ನೀಡುತ್ತಿದ್ದ ಇಂಥ ಒಂದು ಮಠವೇನಾದರೂ ಹಿರಿಯೂರಲ್ಲಿ ಇದ್ದಿತೇ ಎಂದು ವಿಚಾರಿಸಿದಾಗ, ಈಗ ಸುಮಾರು ಅರ್ಧ ಶತಮಾನದ ಹಿಂದೆ ಇಲ್ಲಿ ಮನೆಗಳೆಂಬಂತಿದ್ದ ಸಣ್ಣ ಸಣ್ಣ ಕೆಲವು ವೀರಶೈವ ಮಠಗಳಿದ್ದುದರ ವಿಚಾರ ತಿಳಿಯಿತು. ಆ ಮಠಗಳು ಇವು: ಪಂಚಾಕ್ಷರಯ್ಯನವರ ಮಠ ಅಥವಾ ಹಿರೇಮಠ, ಶಾಂತಯ್ಯನವರ ಮಠ, ಸಿದ್ಧಲಿಂಗಯ್ಯನವರ ಮಠ, ಗಂಗಾಧರಯ್ಯನವರ ಮಠ, ಗಂಗಯ್ಯನವರ ಮಠ (ಗಂಗಾಧರಯ್ಯನವರ ಮಠವನ್ನೇ ಸಂಕ್ಷೇಪಿಸಿ ಗಂಗಯ್ಯನವರ ಮಠ ಎಂದು ಕರೆಯುತ್ತಿದ್ದರೋ ಹೇಗೋ), ಗುಡಾಣದಯ್ಯನವರ ಮಠ, ಗೌರೀಮಠ ಎಂಬ ಮಠಗಳಿದ್ದುವು. ಊರ ಹೊರಗೆ ದೂರದಲ್ಲಿ ಪುರದ ಮಠ ಎನ್ನುವ ಒಂದು ಮಠವಿದ್ದ ಸ್ಥಳವೂ ಇದೆ. ಇವಲ್ಲದೆ ಈಗ ಚಿಟಕಮಲ್ಲಪ್ಪನ ಗುಡಿ ಎಂದು ಕರೆಯುವ, ಊರ ಪಶ್ಚಿಮ ಭಾಗದಲ್ಲಿರುವ ಒಂದು ಗುಡಿಯ ಸ್ಥಳದಲ್ಲಿ ಬ್ರಿಟೀಷರ ಕಾಲದಲ್ಲಿ 'ಕಿಚನ್' ಎಂದು ಕರೆಯಲಾಗುತ್ತಿದ್ದ, ಬಡಬಗ್ಗರಿಗೆ ರಾಗಿಮುದ್ದೆ ಸಾರು ನೀಡುತ್ತಿದ್ದ, ಒಂದು ವ್ಯವಸ್ಥೆ ಇತ್ತು ಎಂದು ಹೇಳುತ್ತಾರೆ. ಈಗ ಯಾವ ಮಠವೂ ಅಸ್ತಿತ್ವದಲ್ಲಿಲ್ಲದಿದ್ದರೂ ಗಂಗಾಧರಯ್ಯನವರ ಮಠದ ಹಿಂದಿನ ಒಬ್ಬ ಗುರುಗಳ ಗದ್ದಿಗೆ (ಸಮಾಧಿ) ಇರುವ ಮತ್ತು ಆ ಸಮಾಧಿ ಈಗಲೂ ಪೂಜೆಗೊಳ್ಳುತ್ತಿರುವ ವಾಸದ ಮನೆಯೊಂದಿದೆ. ಇದು ಊರಿನ ಪ್ರಮುಖ ದೇವಾಲಯವಾಗಿರುವ ತೇರು ಮಲ್ಲೇಶ್ವರ ದೇವಾಲಯದ ಒತ್ತಿನಲ್ಲೇ ಇದೆಯಲ್ಲದೆ ಈ ಮನೆಯ ಮಗ್ಗುಲ ಅಂಗಳದಲ್ಲಿ ಒಂದು ಲಿಂಗಮುದ್ರೆಯ ಕಲ್ಲು ಇದೆ. ಇಷ್ಟು ಬಿಟ್ಟರೆ ಇಲ್ಲಿನ ಮಠಗಳಲ್ಲಿ ಅನ್ನದಾನ ನಡೆಯುತ್ತಿತ್ತೆ ಎಂಬ ವಿಚಾರವಾಗಲಿ ಇತರ ವಿವರಗಳಾಗಲಿ ಸದ್ಯಕ್ಕೆ ತಿಳಿಯದು. ವಿವಿಧ ಮಠಗಳಿಗೆ ಸೇರಿದವರ ವಂಶೀಕರೆನ್ನುವ ಕೆಲವರು ಈಗಲೂ ಇದ್ದಾರೆ. ಈ ಮಠಗಳ ಬಗ್ಗೆ ಇನ್ನೂ ಹೆಚ್ಚಿನ ಶೋಧ ಅಗತ್ಯವಾಗಿದೆ.

೭. ಲಿಪಿ ದೋಷ, ಓದಿಕೆ ದೋಷ, ಮುದ್ರಣ ದೋಷಗಳಿಂದಾಗಿ ಶಾಸನಗಳಿಂದ ಲಭಿಸಬೇಕಾದ ಎಷ್ಟೋ ಮುಖ್ಯ ಹಾಗೂ ಸಮರ್ಪಕ ಸಂಗತಿಗಳು ಎರವಾಗಿ ಹೋಗಿವೆ. ಇದಲ್ಲದೆ ವಿವಾದಗ್ರಸ್ತ ಹಾಗೂ ಅಸಮರ್ಪಕ ಸಂಗತಿಗಳಿಗೆ ಎಡೆಯುಂಟಾಗಿದೆ. ಆದುದರಿಂದ ಈ ಹಿಂದೆ ಪ್ರಕಟವಾಗಿರುವ ಶಾಸನಗಳನ್ನು-ಎಲ್ಲವನ್ನು ಅಲ್ಲದಿದ್ದರೂ ಬಹು ಮುಖ್ಯವಾದುವನ್ನಾದರೂ-ಪುನರ್ ಪರಿಶೀಲಿಸುವುದು ತುಂಬ ಜರೂರಾಗಿ ಆಗಬೇಕಾಗಿದೆ. ಈ ಶಾಸನದ ಪ್ರಕರಣವೂ ಇದನ್ನು ಎತ್ತಿ ತೋರುತ್ತದೆ.

ಪ್ರಸ್ತುತ ಶಾಸನದ, ಈಗ ಉಳಿದಿರುವ ಬರಹದ ಪರಿಷ್ಕೃತ ಪಾಠವನ್ನು ಇಲ್ಲಿ ಕೊಡುತ್ತಿದ್ದೇನೆ. ಈ ಸಂಬಂಧದಲ್ಲಿ ಕೆಲವು ಅಂಶಗಳನ್ನು ಇಲ್ಲಿ ಹೇಳುವುದು ಅಗತ್ಯ. ಶಾಸನದ ಎರಡು ಹೋಳುಗಳ ಬರಹವನ್ನು ಪ್ರತ್ಯೇಕವಾಗಿ ಪ್ರತಿ ತೆಗೆದು, ಆ ಪ್ರತಿಗಳನ್ನು ಪಂಕ್ತಿಗಳ ಕ್ರಮಕ್ಕೆ ಹೊಂದಿಸಿ ತೆಗೆದ ಛಾಯಾಚಿತ್ರವನ್ನು ಇಲ್ಲಿ ಕೊಟ್ಟಿದೆ. ಕಲ್ಲು ಓರೆಯಾಗಿ ಒಡೆದಿರುವುದನ್ನೂ ಕಲ್ಲಿನ ಎಡಭಾಗದಲ್ಲಿ ಹಾಗೂ ಕೆಳಗೆ ಚಕ್ಕಳ ಸುಲಿದಿರುವುದನ್ನೂ ಇದರಲ್ಲಿ ಸುಲಭವಾಗಿ ಗುರ್ತಿಸಬಹುದು. ಹಿಂದೆ ರೈಸರು ಓದಿದಾಗ್ಗೆ ಈ ಶಾಸನದಲ್ಲಿನ ೨೧ ಪಂಕ್ತಿಗಳು ಸುಸ್ಥಿತಿಯಲ್ಲಿದ್ದುವು. ಆದರೆ ಈಗ ಮೊದಲ ೭ ಪಂಕ್ತಿಗಳು ಮಾತ್ರ ಸಂಪೂರ್ಣ ಸುಸ್ಥಿತಿಯಲ್ಲಿವೆ. ನಂತರದ ೩ ಪಂಕ್ತಿಗಳಲ್ಲಿ ಕೆಲವು ಅಕ್ಷರಗಳೂ ನಂತರದ ೨ ಪಂಕ್ತಿಗಳಲ್ಲಿ ಕಡೆಯಲ್ಲಿನ ಒಂದೊಂದು ಅಕ್ಷರ ಬಿಟ್ಟು ಉಳಿದೆಲ್ಲ ಅಕ್ಷರಗಳೂ ಹಾಗೂ ೧೩ನೇ ಪಂಕ್ತಿಯಿಂದ ಮುಂದೆ ಎಲ್ಲ ಪಂಕ್ತಿಗಳ ಎಲ್ಲ ಅಕ್ಷರಗಳೂ ಸಂಪೂರ್ಣ ನಷ್ಟವಾಗಿವೆ.

ಎರಡನೆಯ ಪಂಕ್ತಿಯಲ್ಲಿ 'ವೇ । ತ್ರೈಲೋಕ್ಯ' ಎಂಬುದನ್ನು 'ವೇ । ತ್ರೈಲೋಕ್ಯ' ಎಂದು ಕೆತ್ತಲಾಗಿದೆ. ಅಲ್ಲದೆ ಇಲ್ಲಿ ಎತ್ವ ಒತ್ವಗಳ ದೀರ್ಘವನ್ನು ದೀರ್ಘಸೂಚಕ ಚಿಹ್ನೆ 'ಇಳಿ' ('ೀ')ಯನ್ನು ಬಳಸಿಯೆ ತೋರಿಸಲಾಗಿದೆ. ಉಳಿದೆಡೆಯಲ್ಲಿ ಈ ಚಿಹ್ನೆಯನ್ನು ಬಳಸಿರುವುದಿಲ್ಲ, ಆದುದರಿಂದ ಪರಿಷ್ಕೃತ ಪಾಠದಲ್ಲಿ ಈ ಭಾಗದಲ್ಲಿ ಮಾತ್ರ ದೀರ್ಘ ಸೂಚಕ ಚಿಹ್ನೆ 'ಇಳಿ'ಯನ್ನು ಬಳಸಿದ್ದು, ಉಳಿದೆಡೆ ಹ್ರಸ್ವವಿರುವಂತೆಯೇ ತೋರಿಸಲಾಗಿದೆ. ಹಿಂದೆ ರೈಸರು 'ಉ' ಎಂದು ಓದಿದ್ದುದನ್ನು ಇಲ್ಲಿ 'ವು' ಎಂದು ಓದಲಾಗಿದೆ, ಇದಲ್ಲದೆ ಕೆಲವೆಡೆಯಲ್ಲಿ ರೈಸ್ ಅವರು ಬಿಟ್ಟಿದ್ದ ದಂಡ ಚಿಹ್ನೆಗಳನ್ನು ಇಲ್ಲಿ ಕೊಡಲಾಗಿದೆ. ಕುತೂಹಲವುಳ್ಳವರು ರೈಸರ ಪಾಠದೊಂದಿಗೆ ಇಲ್ಲಿನ ಪರಿಷ್ಕೃತ ಪಾಠವನ್ನು ಹೋಲಿಸಿ ನೋಡಬಹುದು.

ಈಗ ಉಳಿದಿರುವ ಬರಹದ ಪರಿಷ್ಕೃತ ಪಾಠ ;

೧) ನಮಸ್ತುಂಗ ಶಿರಶ್ಚುಂಬಿ ।
ಚೆಂದ್ರ ಚಾಮರ ಚಾರ

೨) ವೇ । ತ್ರೈಲೋಕ್ಯ ನಗರಾರಂಭ ।
ಮೂಲಸಂಭಾಯ ಶಂಭವೆ । ಸ್ವ

೩) ಸ್ತಿ ಶ್ರೀ ವಿಜೆಯೊಭ್ಯುದಯ
ಶಾಲ್ಲಿವಾಹನ ಶಕ । ವರುಶಂ

೪) ಗಳು । ಸಾ ೧೬೭೮ ನೆಯ ।
ದಾತ್ರು ನಾಮ ಸಂ । ವಯಿಶಾಕ ಬ

೫) ೧ ಸ್ತಿರವಾರದಲ್ಲು ।
ವಾಲ್ಮಿಕಿ ಗೊತ್ರದ ಸ್ರಿಮಂನ್ಮಾಹ

೬) ನಾಯಕಾಚಾರ್ಯ್ಯ । ಕಾಮಗೆತ್ತಿ ।
ಕಸುರ್‍ರಿ । ಮೆದಕೆರ್‍ರಿ ನಾ

೭) ಯಕರ । ಪವುತ್ರರದಾ ।
ಕಸ್ತುರ್‍ರಿ ರಂಗಪಣಯಕರ ।

೮) ಪುತ್ರರಾದ । ರಾಜ ।
ಮೆದಕೆರ್‍ರಿ ನಾಯಕ.... ।

೯) ಪೂ ॥ ॥ ಯವರ ಹೆಸರಲ್ಲು ।
ಹಿರಿಯೂ...ಮಾಡಿ

೧೦) .... । ....ನ ಛತ್ರದ ಮಠಕೆ ।
ನಂಮ...ಯರ್‍ರಿ

೧೧) ........................................ಳು

೧೨)...............................................ವು

---

(ಈ ಶಾಸನದ ಪ್ರತ್ಯಕ್ಷ ಅಧ್ಯಯನಕ್ಕೆಂದು ನಾನು ಹೋದಾಗ ಜತೆಯಲ್ಲಿ ಬಂದು ಸಹಕರಿಸಿದ ಶ್ರೀ ಎಲ್. ನಾಗರಾಜು ಅವರಿಗೆ ಮತ್ತು ಗೌಡನಹಳ್ಳಿಯ ಗ್ರಾಮಸ್ಥರಿಗೆ ಹಾಗೂ ಶ್ರೀ ಯಳನಾಡು ಅಂಜನಪ್ಪ ಅವರು, ಶ್ರೀ ಸಣ್ಣೀರನಾಯ್ಕರು (೮೦), ಶ್ರೀ ಆರ್.ಎಸ್. ಕಾಂತರಾಜು ಅವರು ಮತ್ತು ಹಿರಿಯೂರಿನ ಗ್ರಾಮಸ್ಥರು ಇವರಿಗೆ ನನ್ನ ಕೃತಜ್ಞತೆಗಳು.